# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 213
ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ(ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 21-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆನ್‌ಲೈನ್ ಶಿಕ್ಷಣ ಪದ್ಧತಿಯಿಂದಾಗಿ ವಿದ್ಯಾರ್ಥಿಗಳು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಮಧ್ಯಮ ವರ್ಗದ ಜನ ಹಾಗೂ ಬಡವರಿಗೆ ಆನ್‌ಲೈನ್ ಕ್ಲಾಸ್‌ಗಳು ಹೊರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ) | ಆನ್‌ಲೈನ್ ಕ್ಲಾಸ್ ನಡೆಸಲು ಶಾಲೆಗಳು ಬೇಕಾಬಿಟ್ಟಿ ಡೊನೇಷನ್ ತೆಗೆದುಕೊಳ್ಳುತ್ತಿರುವುದರಿಂದ ಮಧ್ಯಮ ವರ್ಗದವರ ಜೀವನ ನಿರ್ವಹಣೆ ಕಷ್ಟವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಲವು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿವೆ |
| ಈ) | ಹಾಗಿದ್ದಲ್ಲಿ, ಇಂತಹ ಶಾಲೆಗಳ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಸರ್ಕಾರದ ಆದೇಶ ಸಂಖ್ಯೆ:ಇಪಿ 139 ಪಿಜಿಸಿ 2020, ದಿನಾಂಕ:27 .06.2020ರಲ್ಲಿ ಎಲ್‌ಕೆಜಿ ಯಿಂದ 10ನೇ ತರಗತಿಯವರೆಗೆ ನಿಯಮಿತ ಶಿಕ್ಷಣಕ್ಕೆ ಪೂರಕವಾಗಿ ಆನ್‌ಲೈನ್ ಶಿಕ್ಷಣ ಒದಗಿಸಲು ಆದೇಶಿಸಲಾಗಿರುತ್ತದೆ.<br>ರಾಜ್ಯ ಉಚ್ಛನ್ಯಾಯಾಲಯದ ರಿ.ಪಿ. ಸಂಖ್ಯೆ:8168/2020 ರಲ್ಲಿ ದಿನಾಂಕ:08.07.2020ರ ಮಧ್ಯಂತರ ಆದೇಶದಲ್ಲಿ ಸರ್ಕಾರ ಆದೇಶ ಸಂಖ್ಯೆ: ಇಪಿ 139 ಪಿಜಿಸಿ 2020, ದಿನಾಂಕ:15.06.2020ರಲ್ಲಿನ ಎಲ್.ಕೆ.ಜಿ ಯಿಂದ 05ನೇ ತರಗತಿಗೆ ಮತ್ತು ಸರ್ಕಾರ ಆದೇಶದ ದಿನಾಂಕ:27.06.2020ರಲ್ಲಿನ ಪೂರ್ವ ಪ್ರಾಥಮಿಕ ತರಗತಿಗೆ ಆನ್‌ಲೈನ್ ತರಗತಿ ನಡೆಸಲು ನೀಡಿರುವ ಆದೇಶಕ್ಕೆ ತಡೆಯಾಜ್ಞೆ ನೀಡಿದ್ದು ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಲಾಗಿದೆ.<br>• ಆನ್‌ಲೈನ್ ಶಿಕ್ಷಣಕ್ಕೆ ಯಾವುದೇ ಹೆಚ್ಚುವರಿ ಶುಲ್ಕವನ್ನು ವಸೂಲು ಮಾಡುವಂತಿಲ್ಲ.<br>• ಆನ್‌ಲೈನ್ ಶಿಕ್ಷಣ ಅಥವಾ ತರಬೇತಿ ಪಡೆಯಲಾಗದ ಮಕ್ಕಳು ಸಾಮಾನ್ಯ ಶಾಲಾ ಶಿಕ್ಷಣದಿಂದ |

| | | |
|---|---|---|
| | | ವಂಚಿತರಾಗದಂತೆ ನೋಡಿಕೊಳ್ಳುವುದು.<br>• ಶಾಲೆಗಳು ಪುನರರಾಂಭವಾದ ನಂತರ ಆನ್‌ಲೈನ್ ಶಿಕ್ಷಣ ದೊರೆಯದ ಮಕ್ಕಳು ಯಾವುದೇ ರೀತಿಯಲ್ಲೂ ಶೈಕ್ಷಣಿಕ ಕಲಿಕೆಯಿಂದ ವಂಚಿತರಾಗದಂತೆ ನೋಡಿಕೊಳ್ಳುವುದು.<br>ಕೋವಿಡ್-19ರ ಹಿನ್ನೆಲೆಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 76 ಪಿಜಿಸಿ 2020, ದಿನಾಂಕ:19.06.2020ರ ಸುತ್ತೋಲೆಯಲ್ಲಿ ಎಲ್ಲಾ ಅನುದಾನರಹಿತ ಶಾಲೆಗಳು 2020-21ನೇ ಶೈಕ್ಷಣಿಕ ಸಾಲಿನಲ್ಲಿ ಯಾವುದೇ ಬೋಧನಾ ಶುಲ್ಕವನ್ನು ಹೆಚ್ಚಿಸಬಾರದೆಂದು ಸೂಚಿಸಿದೆ. ಒಂದು ವೇಳೆ ಶಾಲಾ ಆಡಳಿತ ಮಂಡಳಿಯವರು 2019-20ನೇ ಶೈಕ್ಷಣಿಕ ಸಾಲಿಗಿಂತ ಹೆಚ್ಚಿನ ಬೋಧನಾ ಶುಲ್ಕವನ್ನು ಸಂಗ್ರಹಿಸಿದ ಬಗ್ಗೆ ದೂರುಗಳು ಬಂದಲ್ಲಿ ಕರ್ನಾಟಕ ಶಿಕ್ಷಣ ಕಾಯ್ದೆ-1983ರ ಸೆಕ್ಷನ್-124[ಎ]ರನ್ವಯ ಕ್ರಮ ಜರುಗಿಸಲಾಗುವುದೆಂದು ಸೂಚಿಸಲಾಗಿದೆ.<br>ಆಯುಕ್ತರ ಸುತ್ತೋಲೆ ಸಂಖ್ಯೆ:ಸಿ7[2]ಪ್ರಾಶಿಅ. ಶುಲ್ಕ.30/2020-21, ದಿನಾಂಕ:05.09.2020ರಲ್ಲಿ ಆನ್‌ಲೈನ್ ಶಿಕ್ಷಣ ಪಡೆಯಲಾಗದೆ ಇರುವಂತಹ ಹಾಗೂ ಯಾವುದೇ ತಂತ್ರಜ್ಞಾನ ಹೊಂದದೇ ಇರತಕ್ಕಂತಹ ಶೇಕಡ 80 ಕ್ಕಿಂತ ಹೆಚ್ಚಿನ ಮಕ್ಕಳು ನಿರಂತ ಕಲಿಕೆಯನ್ನು ಮುಂದುವರೆಸಿಕೊಂಡು ಹೋಗಲು ಶಾಲೆ ಹಾಗೂ ಶಿಕ್ಷಕರು ಮಕ್ಕಳೊಂದಿಗೆ ಸಂಪರ್ಕ ಸಾಧಿಸಿ ಮನೋಸ್ಥೈರ್ಯವನ್ನು ಹೆಚ್ಚಿಸುವ ಹಾಗೂ ನಿರಂತರ ಕಲಿಕೆಯನ್ನು ಮುಂದುವರೆಸು ವುದಕ್ಕಾಗಿ ರಾಜ್ಯ ಸರ್ಕಾರವು "ವಿದ್ಯಾಗಮ" ಕಲಿಕಾ ಯೋಜನೆಯನ್ನು ಅನುಷ್ಠಾನಗೊಳಿಸಿದೆ.<br>ಅದೇ ರೀತಿ "ಸಂವೇದನಾ" ಕಾರ್ಯಕ್ರಮದಲ್ಲಿ ದೂರದರ್ಶನದ ಮುಖಾಂತರ ಬೋಧನೆಯನ್ನು ಮುಂದುವರೆಸಲಾಗಿರುತ್ತದೆ.<br>ಖಾಸಗಿ ಅನುದಾನರಹಿತ ಶಾಲೆಗಳು ಸಹಾ ತಮ್ಮ ಶಾಲೆಯಲ್ಲಿ ದಾಖಲಾಗುವ ಮಕ್ಕಳ ನಿರಂತರ ಕಲಿಕೆಯನ್ನು ಮುಂದುವರೆಸಲು ಸರ್ಕಾರದ ಈ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅಥವಾ ತಮ್ಮದೇ ಆದ ಪರ್ಯಾಯ ಕಾರ್ಯಕ್ರಮವನ್ನು ರೂಪಿಸಿಕೊಳ್ಳಲು ಸೂಚಿಸಿದೆ.<br>ಪರ್ಯಾಯ ಕಾರ್ಯಕ್ರಮಕ್ಕೆ ವಿದ್ಯಾರ್ಥಿ/ ಪೋಷಕರುಗಳಿಂದ ಯಾವುದೇ ಹೆಚ್ಚುವರಿ ಶುಲ್ಕವನ್ನು ಪಡೆಯುವಂತಿಲ್ಲ ಎಂಬುದಾಗಿ ತಿಳಿಸಲಾಗಿದೆ. |

ಸಂಖ್ಯೆ: ಇಪಿ 124 ಎಂ.ಹೆಚ್.ಟಿ 2020

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು